# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು: ಶ್ರೀ ಆರ್.ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1446
ಉತ್ತರಿಸುವ ಸಚಿವರು: ಮಾನ್ಯ ಮುಖ್ಯ ಮಂತ್ರಿಯವರು
ಉತ್ತರಿಸಬೇಕಾದ ದಿನಾಂಕ: 19.03.2020

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಮೈಸೂರು ಅರಮನೆ ಶಿಥಿಲಗೊಂಡಿದ್ದು, ಅಲ್ಲಲ್ಲಿ ಸೋರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇದನ್ನು ದುರಸ್ಥಿಪಡಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ; | ಮೈಸೂರು ಅರಮನೆಯು ಪುರಾತತ್ವ ಅಂಶಗಳನ್ನು ಒಳಗೊಂಡಿದೆ. ಇದರ ವಿನ್ಯಾಸ ಮತ್ತು ಬಳಸಿದ ಸಾಮಗ್ರಿಗಳ ಅಧ್ಯಯನದ ಆಧಾರದ ಮೇಲೆ ವೈಜ್ಞಾನಿಕವಾಗಿ ನಿರ್ವಹಣಾ ಕಾಮಗಾರಿಯನ್ನು ಕೈಗೊಳ್ಳಲಾಗುತ್ತಿದೆ. ಅರಮನೆ ಸಂಕೀರ್ಣದ ರಾಜವಂಶಸ್ಥರು ವಾಸಿಸುವ ಕರಿಕಲ್ಲು ತೊಟ್ಟಿ ಭಾಗದಲ್ಲಿ ಸೋರಿಕೆ ಕಂಡುಬಂದಿದ್ದು, ಸೋರಿಕೆಯನ್ನು ತಾತ್ಕಾಲಿಕವಾಗಿ ತಡೆಹಿಡಿಯಲಾಗಿದೆ. ಖಾಯಂ ದುರಸ್ಥಿಗೆ ಸಂಬಂಧಿಸಿದಂತೆ ಸದರಿ ಕಾಮಗಾರಿಯ ದುರಸ್ಥಿಯನ್ನು ಕೈಗೆಳ್ಳಲಾಗಿದ್ದು, ದುರಸ್ಥಿ ಕಾಮಗಾರಿ ಪ್ರಗತಿಯಲ್ಲಿರುತ್ತದೆ. |
| ಆ | ವಿಶ್ವ ವಿಖ್ಯಾತ ದಸರಾ ನೋಡಲು ಸಾವಿರಾರು ಜನರು ಮೈಸೂರಿಗೆ ಬರುತ್ತಿದ್ದು, ಅರಮನೆಗೂ ಜನ ಭೇಟಿ ನೀಡುತ್ತಿರುವುದರಿಂದ ಇದರ ಸಂರಕ್ಷಣೆಗೆ ಸರ್ಕಾರದಿಂದ ಯಾವ ರೀತಿಯ ಕ್ರಮ ಕೈಗೊಳ್ಳಲಾಗಿದೆ? | ದಸರಾ ಸಂದರ್ಭದಲ್ಲಿ ಅಲ್ಲದೇ ಇತರೆ ಸಮಯದಲ್ಲಿಯೂ ಸಹ ನಿಯಮಾನುಸಾರ ಅರಮನೆಯ ಸಂರಕ್ಷಣೆಯನ್ನು ಮೈಸೂರು ಅರಮನೆ ಮಂಡಳಿಯ ವತಿಯಂದ ಮಾಡಲಾಗುತ್ತಿದೆ.<br><br>ಮೈಸೂರು ಅರಮನೆ ಭದ್ರತೆಗಾಗಿ ಉನ್ನತ ಗುಣಮಟ್ಟದ ಸಿ.ಸಿ.ಟಿ.ವಿ ಕ್ಯಾಮರಾಗಳನ್ನು ಅಳವಡಿಸಲಾಗಿದೆ. ಅರಮನೆ ಭದ್ರತಾ ಪಡೆಯಿಂದ ಭದ್ರತಾ ವ್ಯವಸ್ಥೆಗಳನ್ನು ನೀಡುವ ಮೂಲಕ ಪ್ರವಾಸಿಗರಿಗೆ ಅನುಕೂಲ ಮಾಡಲಾಗಿರುತ್ತದೆ ಹಾಗೂ ಆಗಮಿಸುವ ಪ್ರವಾಸಿಗರಿಂದ ಅರಮನೆಯ ಕಟ್ಟಡಕ್ಕೆ ಯಾವುದೇ ರೀತಿಯ ಹಾನಿಯಾಗದಂತೆ ಅರಮನೆ ಭದ್ರತಾ ಪಡೆಯಿಂದ ಎಚ್ಚರಿಕೆ ವಹಿಸಲಾಗಿರುತ್ತದೆ. |

ಸಂಖ್ಯೆ: ಸಿಆಸುಇ 44 ಸೇಅವಿ 2020

(ಬಿ.ಎಸ್ ಯಡಿಯೂರಪ್ಪ)
ಮುಖ್ಯ ಮಂತ್ರಿ